
ಆಗ್ನಿಯ ಬರ್ತೋ
ತುಂಟ ಕರಡಿಮರಿ

ಆಗ್ನಿಯ ಬರ್ತೋ

# ತುಂಟ ಕರಡಿಮರಿ

ಚಿತ್ರಗಳು: ವ್ಲದೀಮಿರ್ ಸುತೇಯೆವ್

ಅನುವಾದ: ಕೆ. ಎಲ್. ಗೋಪಾಲಕೃಷ್ಣರಾವ್




ರಾದುಗ ಪ್ರಕಾಶನ
ಮಾಸ್ಕೋ



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.
ಬೆಂಗಳೂರು






ಅಮ್ಮನಿಗೊಬ್ಬ ಮಗನಿದ್ದ
ಇರಬಾರದೆ ಎಲ್ಲರಿಗೂ ಅಂಥವನೊಬ್ಬ !
ಅಮ್ಮನ ತದ್ರೂಪವೆ ಅವನು
ಅವಳಂತೆಯೇ ಅವನೊಡಲೂ ಕಂಗೊಳಿಸುವ ಕಂದು.

ಬಿಸಿಲಿನ ಬೇಗೆಯ ತಾಳದೆ
ಮಲಗುವಳಮ್ಮ ಮರದ ಅಡಿ.
ಉಳಿವನೆ ಹಿಂದೆ ಮಗ ಕರಡಿ,
ಮಲಗುವನವನೂ ಬಳಿ ಮುದುಡಿ.

ಹೋಗುತ ಹೋಗುತ ಕರಡಿಮರಿ
ಬೀಳುವುದೊಮ್ಮೊಮ್ಮೆ ಬೇರನು ಎಡವಿ.
"ಅಯ್ಯೋ, ಬಿದ್ದೆಯಾ" ಅಳುವಳು ತಾಯಿ !
ನಿಜಕೂ ಇಲ್ಲವು ಕಾಡಿನಲೆಲ್ಲೂ
ಇಂತಹ ಮುದ್ದಿನ ಕರಡಿಮರಿ.

ಮುದ್ದಾಗಿದ್ದಿತು ಕರಡಿಮರಿ
ಆದರೆ ಶಿಸ್ತೇ ತಿಳಿಯದು – ಅದರ ಪರಿ !
ಕಂಡರೆ ಜೇನಿನ ಪೀಪಾಯಿ
ತೊಳೆಯದೆ ಹಾಕುವುದದರೊಳು ಕೈಯಿ !

ಬಯ್ಯುವಳಮ್ಮ ಬಳಿ ನಿಂತು:
"ತಿನ್ನಬಾರದೋ ಹಾಗೆ ಗಬಗಬನೆ, ಮಗುವೆ !"
ಕೇಳುವುದೆ ತುಂಟಮರಿ ತಾಯಿ ಮಾತ
ತಿನ್ನುವುದು ಮೇಲಿಂದ ಮೇಲೆ
ಕೆಮ್ಮುವುದು ಉಗುಳುವುದು ಉಸಿರು ಕಟ್ಟಿ.

ಮೆತ್ತಿಹುದು ಜೇನು ಮುಖಕೆಲ್ಲ
ಮೈಯೆಲ್ಲ ಅಂಟು ಅಂಟು.
ತಾಯಿಗಿಹುದಿನ್ನು ಭಾರಿ ಕೆಲಸ
ನೆಕ್ಕಿ ತೊಳೆಯಲು ಬೇಕು ಅದರ ಮೈಯಿ.





ಅಮ್ಮನೂ ಅಪ್ಪನೂ ಮಾತಿಗೆ ಕುಳಿತರೆ
ಶುರು ಮಾಡುವುದಿದು ಗದ್ದಲ ಗಲಭೆ.
ಹಿರಿಯರ ಮಾತಿಗೆ ಮಧ್ಯದಲಿ
ತೊಂದರೆ ಮಾಡುವುದಿದು ಸರಿಯೆ?

ದಿನದಲೆದಾಟವ ಮುಗಿಸಿ ಮಗ ಮರಳಿದ ಮನೆಗೆ
ಏರಿದ ತಾನೇ ಮೊದಲು ಮಲಗಲು ಹಕ್ಕೆಯ ಮೇಲೆ.
ಕೊಡಬೇಡವೆ ಮೊದಲವಕಾಶ ತನಗಿಂತಲೂ ಹಿರಿಯರಿಗೆ?

ಮೊನ್ನಿನ ದಿನ ಹೋಯಿತು ಎಲ್ಲೋ ತುಂಟ ಮರಿ.
ಉಳಿಯಿತು ಕಾಡಲೆ ಮಿತಿ ಮೀರಿ.
ಬಂದಿತು ಮನೆಗೆ ತಡವಾಗಿ
ಮೆತ್ತಿದ್ದಿತು ಮೈ ತುಂಬ ಹುಲ್ಲಿನ ಮುಳ್ಳು ಗರಿ.
ತಾಯಿಯು, ಪಾಪ, ತೊಳೆದಳು ಮೈಯ ಕಾಲಲಿ ತಿಕ್ಕಿ.



ನಾಚಿಕೆ ಇಲ್ಲದೆ ಹೇಳುವುದದು:
“ಸೊಗಸಾಗಿದ್ದಿತು ಆಟ. ಹೊರಳಾಡಿದೆವು ಹಳ್ಳದಲಿ !”
ಅಮ್ಮನಿಗಾದರೋ ಅಳುವೋ ಅಳುವು:
“ತಿಳಿಯದೆ ಇದಕ್ಕೆ ಒಂದಿಷ್ಟೂ ಒಳ್ಳೆಯ ವರ್ತನೆ, ನಡವಳಿಕೆ.
ಕೂಗಾಡುವುದಿದು ಇಡೀ ರಾತ್ರಿ – ಮಲಗಲೆ ಬಿಡದಿದು ನಮಗೆ.”

ಹುಚ್ಚು ಹಿಡಿಸುತಿಹುದದು ತನ್ನಮ್ಮನಿಗೆ.
ಸಹಿಸಲಾಗದು ಅವಳಿಗೆ ಅದರ ತುಂಟತನ.

ಹೋದರು ಅವರೊಮ್ಮೆ ಚಿಕ್ಕಮ್ಮನ ಮನೆಗೆ.
ಅಲ್ಲಿಯೂ ಇದರದು ಅದೇ ಕತೆಯೇ.
ಚಿಕ್ಕಮ್ಮನ ಕಾಲನು ಕಚ್ಚಿತದು,
ತಳ್ಳಿತು ಮಕ್ಕಳ ಮರಗಳ ಮೇಲಿಂದ.

ಅಮ್ಮನು ಕಸಿವಿಸಿಗೊಂಡು ಅತ್ತಳು ಇಡೀ ವಾರ.
ಅತಿಮುದ್ದು ಮಾಡಿದ ತಪ್ಪಿಗೆ ಮರುಗಿದಳು.
"ಅಯ್ಯೋ, ಕೆಡಿಸಿದೆ ಮಗುವನ್ನು,
ಪುಂಡ ಪೋಕರಿಯಾಗಿ ಬೆಳೆದಿಹನಲ್ಲ ಇವನು !"



ಗಂಡನ ಬಳಿ ಹೋಗಿ ಸಲಹೆಯ ಕೇಳಿದಳವಳು.
(ತಿಳಿದಿಹನವನೇನೋ ಅದರ ಮರ್ಮವನೆನ್ನುತ್ತ !)
"ಹಾಳಾಗುತಿಹನೆಮ್ಮ ಮಗನು ದಿನದಿನಕೂ
ಹೇಳಿ, ತಿದ್ದಲಿಕವನ ಮಾಡಬೇಕೇನು ?

ತಪ್ಪು ಸರಿ ಗೊತ್ತಿಲ್ಲ ಅವನಿಗೇನೂ
ಕದಿವ ಮೊಟ್ಟೆಗಳೆಲ್ಲ ಹಕ್ಕಿ ಗೂಡುಗಳಿಂದ
ಅಣಕಿಸುವನೆಲ್ಲರನು, ಜಗಳಗಂಟ.
ಹೊಡೆದಾಟಕಿಳಿಯುವನು ಹೋದೆಡೆಗಳಲ್ಲೆಲ್ಲ !"





ಗಹಗಹಿಸಿ ಅಣಕಿಸುತ ಹೇಳಿದನು ಗಂಡ:
"ನನ್ನ ಕೇಳುವೆಯೇಕೆ, ತಪ್ಪಾರದಿದರಲ್ಲಿ?
ಅಮ್ಮನಾಗಿಹ ನೀನು ಸುಮ್ಮನಿಹೆಯೇಕೆ?
ಮಗನ ಅಂಕೆಯಲಿರಿಸದಿಹ ನೀನೆಂಥ ತಾಯಿ?
ಆ ತುಂಟ ಏಷ್ಟಾದರೂ ನಿನ್ನ ಮಗನಷ್ಟೆ
ನೀನುಂಟು ಅವನುಂಟು ನನಗ್ಯಾಕೆ ಚಿಂತೆ?
ನೀನೆ ತರಬೇಕವನ ತಹಬಂದಿಗೆ."

ಬೆಳೆಯಿತು ಕರಡಿಮರಿ ಗೊತ್ತುಗುರಿ ಇಲ್ಲದೆ,
ಅಪ್ಪನನೂ ಲೆಕ್ಕಿಸದ ದುಷ್ಟನಾಗಿ.
ಅಬ್ಬಾ, ಎಂಥ ಸೊಕ್ಕು ಈ ಕರಡಿಮರಿಯದು ನೋಡಿ,
ತಂದೆ ಕರಡಿಯ ಮೇಲೂ ಕೈಯ ಎತ್ತುವುದಲ್ಲ!

ಕುಪಿತನಾದನು ತಂದೆ, ಗುಟುರು ಹಾಕಿದನೊಮ್ಮೆ
ಎತ್ತಿಕೊಂಡನು ಕೈಗೆ ದೊಡ್ಡ ಬಡಿಗೆ.
(ಮಗನ ಇತ್ತೀಚೆಗಿನ ತುಂಟತನ
ಕೆರಳಿಸಿತ್ತೆಂದು ತೋರುತ್ತೆ ಅವನ!)

ಅಮ್ಮ ಓಡುತ ಬಂದು ಚೀರ ತೊಡಗಿದಳು:
"ಓಹ್, ನೋಡಲಾರೆನು ನಾನು ಈ ದೃಶ್ಯವನ್ನು!
ತಾಳಲಾರೆನು ನಾನು ಈ ಸಂಕಟವನು.
ಪಾಪ, ಸಣ್ಣ ಮಗು, ಬಡಿಯುತಿಹಿರೇಕವನ,
ಸಾಕು ಮಾಡಿರಿ ನಿಮ್ಮ ಕೋಪ ತಾಪ!"



ಗಂಡಹೆಂಡಿರ ಜಗಳ ನಡೆಯುತಿರೆ ಹೀಗೆ
ಹಾಳಾಗದೆ ಉಳಿಯುವುದೆ ಸಂಸಾರ ಸೌಖ್ಯ?
ಮಗ ಬೆಳೆಯುತಲೆ ಹೋದ ಅವಿಧೇಯನಾಗೇ!

ಅಚ್ಚರಿಯೆ ನಿಮಗೆ ಈ ಕಥೆಯ ಕೇಳಿ?
ನನಗಿಲ್ಲ ಆಶ್ಚರ್ಯ ಹೇಳುವೆನು ಕೇಳಿ.
ಕೇಳಿಹೆನು ನಾನು ಈ ಮಾತ ಬಹು ವೇಳೆ:
"ಮಕ್ಕಳ ಮಧ್ಯೆಯೂ ಕೆಲವೊಮ್ಮೆ
ಕಾಣಬಹುದಿಂಥ ಕರಡಿಮರಿಗಳನು, ನಿಜವೆ!"



